ಶ್ರೀರಸ್ತು.

# ಸರ್ವಜ್ಞ ಪದ್ಯಗಳು.

---

ಯೆಲ್ಲಂಭಟ್ಟರ ಸೀತಾರಾಮ ಶಾಸ್ತ್ರಿಗಳವರಿಂದ

ಪರಿಷ್ಕರಿಸಲ್ಪಟ್ಟು,

---

ಬೆಂಗಳೂರಲ್ಲಿರುವ ಮೈಸೂರು ಬುಕ್ ಡಿಪೋ ಏಜಂಟ

ವೆಲನಾಡು ಬಿ. ಸುಬ್ಬೈಯ್ಯನವರಿಂದ

ಪಬ್ಲಿಷ್ ಮಾಡಲ್ಪಟ್ಟಿತು.

ಮೊದಲನೇ ಛಾಪೆ ಪ್ರತಿ ೧೦೦೦.




ಬೆಂಗಳೂರು

ವೆಸ್ಲಿಯನ್ ಮಿಶ್ಯನ್ ಪ್ರೆಸ್ಸಿನಲ್ಲಿ ಛಾಪಿಸಲ್ಪಟ್ಟಿತು.

೧೮೭೨.

# HINDU MEDICINES.

## ಹಿಂದು ಔಷಧಗಳು.



---

### ಹುಚ್ಚುನಾಯಿ ಕಚ್ಚಿದ್ದಕ್ಕೆ.

ಉಮ್ಮತ್ತದ ಬೇರು, ಎಕ್ಕೆ ಬೇರು, ಈ ಎರಡು ಕೂಡ ಕಾಲುರೂಪಾಯಿತೂಕ ಅಕ್ಕಚ್ಚಿನಿಂದ ತೇದು ಹೊಟ್ಟೆಗೆ ಕೊಡುವದು. ಮತ್ತು ಸ್ವಲ್ಪ ಬಿಸಿಮಾಡಿ, ೭ ದಿನ ಪರಿಯಂತರ ಆ ಘಾಯಕ್ಕೆ ಹಚ್ಚುವದು. ವಿಷಹರ; ಹಾಲು ಮಜ್ಜಿಗೆ ತುಪ್ಪ ತಿನ್ನಬಾರದು.

### ಇಲಿಯ ವಿಷಕ್ಕೆ.

ಅಂಕೋಲೆಯ ಬೇರು ಬಿಸಿನೀರಿನಲ್ಲಿ ಅರದು ತೆಗದು ಕೊಳ್ಳಬೇಕು, ಮತ್ತು ಮೈಗೆ ಸ್ವಲ್ಪ ತಾಗಿಸಿಕೊಳ್ಳಬೇಕು; ಅದಕ್ಕೆ ಪಥ್ಯ ಮೇಲೆ ಹೇಳಿದ್ದೇ ಆಗಿರುತ್ತದೆ.

### ಸರ್ಪದ ವಿಷಕ್ಕೆ.

ಬಿಳೇ ಹೂವಿನ ಗರುಡಪಾತಾಳದ ಬೇರು ನಿಂಬೇರಸದಿಂದ ಅರದು ದಿವಸ ದಿವಸಕ್ಕೆ ಕಾಲು ರೂಪಾಯಿಾ ತೂಕ ತೆಗದುಕೊಳ್ಳಬೇಕು ಮತ್ತು ಆ ಘಾಯಕ್ಕೆ ಸಹ ಹಚ್ಚಬೇಕು. ಹೀಗೆ 3 ದಿವಸ ಮಾಡಬೇಕು. ಹಾಲು ತುಪ್ಪ ಎಣ್ಣೆ ಮಜ್ಜಿಗೆ ತೆಗದುಕೊಳ್ಳಬಾರದು.

### ಚೇಳು ವಿಷಕ್ಕೆ.

ಈಶ್ವರಿಯ ಬೇರು, ಉತ್ತರಣೆಯ ಬೇರು, ಈ ಎರಡನ್ನೂ ತಣ್ಣೀರಿನಿಂದ ಅರದು, ಕಾಲುರೂಪಾಯಿ ತೂಕ ಹೊಟ್ಟೆಗೆ ತೆಗದುಕೊಳ್ಳಬೇಕು. ಮತ್ತು ಘಾಯಕ್ಕೆ ಹಚ್ಚಲು ವಿಷಹರ.

### ಕಂಡಡೀ ಹಾವು ವಿಷಕ್ಕೆ.

ಅಂಕೋಲೆ ಬೇರು, ಪಲ್ಲಿ ಬೇರು, ಈ ಎರಡನ್ನು ಬಿಸಿನೀರಿನಿಂದ ಅರದು ಅರ್ಧ ರೂಪಾಯಿ ತೂಕ ಹೊಟ್ಟೆಗೆ ಕೊಡಬೇಕು. ಬಿಸಿ ಮಾಡಿ ಘಾಯಕ್ಕೂ ಹಚ್ಚಬೇಕು. ಹೀಗೆ ೭ ದಿನ ಮಾಡಬೇಕು. ಉಪ್ಪು ಹುಳಿ ಎಣ್ಣೆ ತುಪ್ಪ ಹಾಲು ಮಜ್ಜಿಗೆ ಸಹ ತಿನ್ನಬಾರದು.

bi XIV 290. kps. 40

# ಸರ್ವಜ್ಞ ಪದ್ಯಗಳು.

## ರಾಜನೀತಿ.

ತ್ರಿಪದಿ॥ ನಚ್ಚಿರ್ದಂತರಸಿನ ಇಚ್ಛೆಯಂತಿರುವದದು । ವಚ್ಚೊತ್ತು ತಪ್ಪಿ ನಡೆದರೆ, ಹೊತ್ತೇರಿ । ಕಿಚ್ಚು ಕಾದಂತೆ? ಸರ್ವಜ್ಞ. ॥೧॥

ಬಲ್ಲವರುಹಾಂಸೆಯು ಕಲ್ಲನ್ನು ಮೆಟ್ಟುವರೆ? ಬಲ್ಲಿದರೊಡನೆ ಶಣಿಸಿ ಮಾತಾಡಿದ । ರಲ್ಲಿಯೆ ಕೇಡು? ಸರ್ವಜ್ಞ. ॥೨॥

ಅರಸನೋಲಗದೊಳಗೆ ಸರಸವಾಡಲಿಬೇಡ । ಸರಸನಿಂದ್ಯದಲಿರಬೇಡ! ಪ್ರೋರ್ವರ । ಭರವಸಬೇಡ! ಸರ್ವ. ॥೩॥

ಅರಸೊಲಿದು ನಡಸಿದರೆ, ಸಿರಿಯುಕ್ಕು ದೆಶೆಯುಕ್ಕು । ಕರಿ ತುರಗ ಬಲವು ಪಿರಿದಕ್ಕು; ಮುನಿದರೆ। ಕರನಾಶವಕ್ಕು. ॥೪॥

ಹರಿವೀರೆಳೆವಳ್ಳಿ, ತುರಗ, ಬೈತ್ರವು, ಭಂಡಿ । ಅರಸಿನ ಮನವು, ಬೆಲೆವೆಂಣು, ಇವುಯೋಳು। ತಿರುಹುವವರಿಚ್ಛೆ. ॥೫॥

ಜಾತಿವೀರರುಸಾವ ಭೀತಿಗಂಜುಳವರೇ । ಜಾತಸ್ಯಮರಣಂ ಧ್ರುವವೆಂಬುದಿರಲು । ಯಾತಕಂಜುವದು? ಸರ್ವ. ॥೬॥

ಅಡಿಯುಮುಂದಿಡೆ, ಸ್ವರ್ಗವಡಿಯುಹಿಂದಿಡೆ, ನರಕ । ಅಡಿಗಶ್ವಮೇಧಫಲ; ಸ್ವಾಮಿಕಾರ್ಯಕ್ಕೆ। ಮಡಿಯಲೇಬೇಕು. ॥೭॥

ಅನವರತವಗಲದಲೆ, ಜನಪತಿಯುನೋಲೈಸು । ಧನವುಕ್ಕು, ತೇಜಪಿರಿದಕ್ಕು, ವೈರಿಯು । ತನಗೆ ಸಖಸಕ್ಕು ॥೮॥

ಯಂತಪ್ಪನಾದರೂ, ಮಂತ್ರಿಯು ಹಗೆಹೊಲ್ಲಾ । ಯಂತಕ್ಕುಮರಸು ಮುನಿದರೆ, ಯಾಮಂತ್ರಿ । ಅಂತಕನಕ್ಕು. ॥೯॥

ಮಂತ್ರಿಯಾಹಗೆ ನೃಪನ ಕಾಂತಿಯು ಸಮಗೋಷ್ಟಿ । ಮಂತ್ರವಿಲ್ಲದ ನೊಡನಾಟವಿವುತನ್ನ । ಅಂತಕಾಲಕ್ಕೆ. ॥೧೦॥

ಪರನಾರಿಸೋದರನು ವರಶತ್ರುದಲ್ಲಣನು । ಖರಪಾಪ ಭಯಹೊರೆವ ಗುಣಿಯುಹನೃಪಗೆ । ಸ್ಥಿರವಿಹಳುಲಕ್ಷ್ಮಿ. ॥೧೧॥

ಹೊನ್ನು ಮುನ್ನತವಿಲ್ಲ, ಮುನ್ನಣಿಯು ಪಿರಿದಿಲ್ಲ । ಬಿನ್ನಪ ಕೇಳದರಸಿ ನೋಲಗಕಿಂತ । ಸಂನ್ಯಾಸಲೇಸು; ॥೧೨॥

ನುಡಿಯುಪಾಲಿಸಿ ನುಡಿಯೆ ನುಡಿಯುವದು ಜಗವೆಲ್ಲ । ನು ಡಿದರೇ, ಕೆರಳಿ ಕಿಡಿಯುಹ ನೃಪನನ್ನು । ನುಡಿಸುವವರ್ಯಾರು? ಸರ್ವಜ್ಞ. ॥೧೩॥

ಅಪಮಾನದೂಟಕಿಂದುಪವಾಸವೇಲೇಸು । ನೃಪನೆದ್ದು ಬ ಡಿವ ವೊಡ್ಡೋಲಗಕ್ಕಿಂತ । ತಪವೆಲೇಸೆಂದ; ಸರ್ವ. ॥೧೪॥

## ದಾನಪದ್ಧತಿ.

ಅನ್ನವನು ಯಿಕ್ಕುವದು; ನನ್ನಿಯನು ನುಡಿಯುವದು । ತನ್ನಂತೆ ಪರರ ಬಗೆದಡೆ, ಕೈಲಾಸ । ಬಿನ್ನಣವಕ್ಕು. ॥೧೫॥

ಕೊಟ್ಟದ್ದು ತನಗೆ ಬೈಚಿಟ್ಟದ್ದು; ಪರರಿಂಗೆ ಕೊಟ್ಟದ್ದು ಕೆಟ್ಟತೆನಬೇಡ ಅದುಮುಂದೆ । ಕಟ್ಟಹುದು ಬುತ್ತಿ. ॥೧೬॥

ಈವಂಗೆ ದೇವಂಗೆ ಯಾವದಂತರವೈಯ್ಯ? ದೇವನು ಜ ಗದಿ ಕೊಡುವವನೆ, ಕೈಯಾರೆ । ಈವನೆದೇವ. ॥೧೭॥

ಮರಣವೆಂಬುದು ಸತ್ಯ, ಹರನಾಣೆ! ಪುಸಿಯಲ್ಲ; । ತರುಣಿಯರಿಗಿರಿಸೆ, ಪರರುಂಬರದರಿಂದ । ವರದಾನಲೇಸು? ಸರ್ವಜ್ಞ. ॥೧೮॥

ಸಿರಿಬಂದಕಾಲಕ್ಕೆ ಕರೆದು ದಾನವ ಮಾಡು! ಪರಿಣಾಮ ವಕ್ಕು, ಪದವಕ್ಕು ಸ್ವರ್ಗವು । ನೆರೆಮನೆಯುಕ್ಕು. ॥೧೯॥

ಆಗಬಾ! ಈಗಬಾ! ಹೋಗಿಬಾ! ಅನ್ನದೇ, । ಆಗಲೇಕರೆ ದು ಕೊಡುವವನ ಧರ್ಮ ಹೊಂ । ನಾಗದೆ ಬಿಡದು; ॥೨೦॥

## ದಾನಹೀನ ಪದ್ಧತಿ.

ಉಳ್ಳಲ್ಲಿ ಉಣಲಿಲ್ಲ; ವುಳ್ಳಲ್ಲಿ ವುಡಲಿಲ್ಲ । ವುಳ್ಳಲ್ಲಿದಾನ ಕೊ ಡದವನ ವೊಡಿವೆಯು । ಕಳ್ಳಗೆ ನೃಪಗೆ; ಸರ್ವ. ॥೨೧॥

ಉಣ್ಣಿ ಕೆಚ್ಚಲೊಳಿದ್ದು ಉಂಣದದುನೊರೆಹಾಲ; | ಪುಣ್ಯವ ಮಾಡಿ ಉಣಲೊಲ್ಲದವನಿರವು|ಉಣ್ಣಿಗು ಕಷ್ಟ. ||೨೨||

ಇಲ್ಲನೆಂದರೆ, ಬಡವ ಬಲ್ಲಥಾವಿಗೆ ಹೋಹ| ಇಲ್ಲವೆನಲೊಲ್ಲ ಕೊಡದ ಲೊಲ್ಲದ ಪಾಪಿ | ಕೊಲ್ಲದೆ ಕೊಂದ. ||೨೩||

ಕಟ್ಟಿದಂಥಾಯುಧವು ಅಟ್ಟಬಂದಿರಿಯುವದೆ | ಕೊಟ್ಟಹೆನೆಂದು ಕೊಡಲೊಲ್ಲದನವಾತು | ಅಟ್ಟಿ ಯಿರಿದಂತೆ. ||೨೪||

ಆಡದೇಮಾಡುವನು ರೂಢಿಯೊಳಗುತ್ತಮನು | ಆಡಿಮಾಡುವನು ಮಧ್ಯಮನಧಮತಾ | ನಾಡಿಮಾಡದವ; ||೨೫||

ಬೇಡದೇ ಮುನ್ನೀವ ರೂಢಿಯೊಳಗುತ್ತಮನು; | ಬೇಡಿದಡೀವ ಮಧ್ಯಮ; ಯಧಮತಾ | ಬೇಡಿದಡೀಯ; ||೨೬||

ಇಚ್ಛೆಯರಿದಿತ್ತಂಥ ನುಚ್ಚೊಂದು ಮಾಣಿಕವು | ಇಚ್ಛೆಯುತೀರ್ದಬಳಿಕಿತ್ತ ಮಾಣಿಕವು | ನುಚ್ಚಿಗುಕಷ್ಟ; ||೨೭||

ಬೇವುಫಲವಾಗದು ಸೇವಿಸಲಿಕ್ಕ್ಯೋಗ್ಯವೇ | ಗಾವಿಲನಧನವು ಘನವಾಗಬೈಚಿಟ್ಟ| ತಾವಿಲೀಹಾಳು ಸರ್ವಜ್ಞ. ||೨೮||

## ವಿಧಿವಾಸಪದ್ಧತಿ.

ಕೇಡುಬಹಕಾಲಕ್ಕೆ ಕೂಡುವವೆಬುದ್ಧಿಗಳು |ನೋಡಗಸಾಲಂಕೆಸುಡುವಾಗ, ರಾವಣ | ನಾಡಕಾದಿರ್ದ; ||೨೯||

ಸೀತೆಸ್ನೈದದು ಭಂಗ; ಸೇತು ಕಟ್ಟಿದಭಂಗ; | ಮಾತಿನ ಭಂಗ ರಾಮಂಗೆ; ರಾವಣಗೆ| ಯಾತರಭಂಗ ಸರ್ವಜ್ಞ. ||೩೦||

ಎಲ್ಲ ತೀರ್ಥದೊಳಿರಲು, ಬಲ್ಲಿದರ ಮರೆಹೊಗಲು | ಕಲ್ಲುಮಾಳಿಗೆಯೊಳಗಿರಲು ವಿಧಿಬಂದು | ಕೊಲ್ಲುವದುಸತ್ಯ. ||೩೧||

## ಕುಲಪದ್ಧತಿ.

ಜಾತಿಹೀನರಮನೆಯ ಜೋತಿ ತಾಹೀನವೇ | ಜಾತಿವಿಜಾತಿಯುನಬೇಡ ದೇವನೊಲಿ | ದಾತನೇಜಾತ ಸರ್ವಜ್ಞ. ||೩೨||

ಹೊಲಿಯ ಮಾದಿಗರುಂಡು ತೊಗಲಿಟ್ಟ ತೊಗಲೊಳಗೆ। ಕುಲಜರೆಂಬರಿಗೆ ವುಣಲಾಯಿತು; ಹೊಲಿಯನ । ಕುಲವಾವುದಯ್ಯ? ಸರ್ವಜ್ಞ. ॥ ೩೩ ॥

ಧಾತುಯೇಳವು ಕಲಿತು ಭೂತ ಪಂಚಕವಾಗಿ । ವ್ರೋತು ದೇಹವನು ಧರಿಸಿರ್ದ ಮನುಜಗೆ । ಜಾತಿ ಯೆತ್ತಣದು? ॥ ೩೪ ॥

ನಡೆಯೊದೊಂದೇ ಭೂಮಿ; ಕುಡಿಯುದೊಂದೇ ನೀರು । ಸುಡುವಗ್ನಿಯೊಂದೆ ಇರುತಿರೆ; ಕುಲಗೋತ್ರ । ನಡುವೆ ಯೆತ್ತಣದು? ಸರ್ವಜ್ಞ. ॥ ೩೫ ॥

ಹಸಿವು ತೃಷೆನಿದ್ರೆಗಳು ವಿಷಯಮೈಥುನಬಯಕೆ। ಪಶು ಪಕ್ಷಿ ನರಗೆ ಸಮವಿರಲು, ಕುಲವೆಂಬ । ಘಸಣೆ ಯೆತ್ತಣದು? ಸರ್ವಜ್ಞ. ॥ ೩೬ ॥

ಎಲುತೊಗಲು ನರಮಾಂಸ ಬಲಿದಚರ್ಮದ ಹೊದಿಕೆ । ಹೊಲೆರಕ್ತ ಶುಕ್ಲದಿಂದಾದ ದೇಹಕ್ಕೆ । ಕುಲವಾವುದಯ್ಯ? ॥ ೩೭ ॥

ಅವಯವಗಳೆಲ್ಲರಿಗೆ ಸಮನಾಗಿಯಿರುತಿರಲು । ಭವಿಭಕ್ತ ಶ್ವಪಚ ಶೂದ್ರರುಯೆಂತೆಂಬ । ಕವನ ಯೆತ್ತಣದು? ॥ ೩೮ ॥

ಹೊಲಸ ಮಾಂಸದ ಹುತ್ತ, ಎಲುವಿನ ಹಂದರವು, । ಹೊಲಹದ ತನುವಿನೊಳಗಿರ್ದು ಮದರಲ್ಲಿ । ಕುಲವನರಸುವರು? ಸರ್ವಜ್ಞ. ॥ ೩೯ ॥

ಎಲುವಿನೀಕಾಯಕ್ಕೆ ಸಲೆಚರ್ಮವನು ಹೊದಿಸಿ । ಮಲಮೂತ್ರ ಕ್ರಿಮಿಗಳೊಳಗಿರ್ದ ದೇಹಕ್ಕೆ । ಕುಲವಾವುದಯ್ಯ? ಸರ್ವಜ್ಞ. ॥ ೪೦ ॥

ಒಂದು ಆವಿಗೆಯು ಭಾಂಡೊಂದೊಂದು ಭೋಗವನು । ಅಂದದಿ ಸಂದುಪಡದು ಹಂಚಾದಂತೆ, । ಬಿಂದುವಿನ ದೇಹ? ಸರ್ವಜ್ಞ. ॥ ೪೧ ॥

ಕುಲಗೆಟ್ಟವರಚಿಂತೆ ಯೊಳಗಿರ್ಪರಂತಲ್ಲ; । ಕುಲಗೆಟ್ಟು ಶಿವನ ಮರೆಹೊಕ್ಕ ಋಷಿಗಳು । ಕುಲವಾದರಯ್ಯ. ॥ ೪೨ ॥

## ಗುರುಪದ್ಧತಿ.

ಒಳ್ಳೆಗುರುಡರು ಕೂಡಿ ಹಳ್ಳವನುಬಿದ್ದಂತೆ । ಒಳ್ಳೆಗುರುವಿನ ಉಪದೇಶವಿಲ್ಲದಿರೆ । ಯೆಲ್ಲಿಯದು ಮುಕ್ತಿ? ಸರ್ವ. ॥೪೩॥

ಶ್ವಾನ ತೆಂಗಿನರುಚಿಯು ತಾನೇನುಬಲ್ಲದು । ಹೀನಮನದವಗೆ ಉಪದೇಶವಮಾಡಿದರೆ । ಹಾನಿತಪ್ಪುವದೆ? ಸರ್ವ. ॥೪೪॥

ಸುರತರವುಮರನಲ್ಲ; ಸುರಭಿಯೊಂದಾವಲ್ಲ । ಪರುಷ ಪಾಷಾಣದೊಳಗಲ್ಲ ಗುರುರಾಯ। ನರರೊಳಗಲ್ಲ; ಸರ್ವ. ॥೪೫॥

ಮಂಡೆಬೋಳಾದಡಂ, ದಂಡಕೋಲ್ವಿಡಿದಡಂ । ಹೆಂಡತಿಯಬಿಟ್ಟು ನಡೆದಡೇನಾಯ್ತು? ಗುರು । ಕಂಡಲ್ಲದಿಲ್ಲ; ಸ. ॥೪೬॥

ತಾಪದಲಿಸಂಸಾರ ಕೂಪದಲಿಬಿದ್ದವರ । ಕೂಪದಿಂಪಾರುಮಾಡುವ ಗುರುಕರುಣ । ಸೋಪಾನ, ಕಂಡ್ಯಾ! ಸರ್ವ. ॥೪೭॥

ಹೊಲಬನರಿಯದ ಗುರುವು, ತಿಳಿಯಲರಿಯದಶಿಷ್ಯ । ನೆಲೆಯನಾರಯ್ಯದುಪದೇಶವಂಧಕನು । ಕೊಳನು ಹೊಕ್ಕಂತೆ; ಸರ್ವಜ್ಞ. ॥೪೮॥

ಭಕ್ತಿಯಿಲ್ಲದ ಶಿಷ್ಯ ಗೊತ್ತಿಕೊಟ್ಟುಪದೇಶ । ಬತ್ತಿದಕೆರೆಯ ಬೈಲಲ್ಲಿ ರಾಜಾನ್ನ । ಬಿತ್ತಿ ಬೆಳೆದಂತೆ. ॥೪೯॥

## ದೈವಪದ್ಧತಿ.

ಒಬ್ಬನಲ್ಲದೆ ಜಗಕೆ ಇಬ್ಬರುಂಟೆ? ಮತ್ತೆ । ಒಬ್ಬ ಸರ್ವಜ್ಞ ಕರ್ತನು ಜಗಕೆಲ್ಲ । ಒಬ್ಬನೇದೇವ, ಸರ್ವಜ್ಞ. ॥೫೦॥

ಭ್ರಷ್ಟದೈವಕೆಬಾಯ ಬಿಟ್ಟಲ್ಲಿ ಫಲವಿಲ್ಲ । ಸೃಷ್ಟಿಗೀಶ್ವರನಭಜಿಸಿದರೆ, ಮುಂದಕ್ಕೆ । ಇಷ್ಟಾರ್ಥವೀವ. ॥೫೦॥

## ಭಕ್ತಿಪದ್ಧತಿ.

ಯಣಿಸುತಿರ್ಪುದು ಬೆರಳು; ಗುಣಿಸುತಿರ್ಪುದು ಜಿಂಹ್ವೆ । ಮನಹೋಗಿ ಹಲವ ನೆಣಿಸಿದರೆ, ಹಾಳೂರ । ಶುನಕನಂತಕ್ಕು, ಸರ್ವಜ್ಞ. ॥೫೧॥

ವೊಸೆದೆಂಟು ದಿಕ್ಕಿನಲಿ ಮಿಸುನಿ ಗಿಣಿಲುಗಿಂಡಿ | ಹುಸಿದು ಮಾಡುವನ ಪೂಜೆತಾ ಭೋಗಾರ | ಪಸರವಿಟ್ಟಂತೆ. ||೫೩||

ಬಟ್ಟೆಯಾಕಲ್ಲಿಂಗೆ ವೊಟ್ಟ ಪತ್ರಿಯನಿಟ್ಟು | ಕಟ್ಟದಲಿಂಗ ವಡಿಯಾಗಿ ಶರಣೆಂಬ | ಭ್ರಷ್ಟನ್ನು ನೋಡು. ೫೪

ಆದಿದೈವನನುತಾ ಭೇದಿಸಲರಿಯದಲೇ | ಹಾದಿಯಾಕಲ್ಲಿ ಗೆಡೆಮಾಡಿ ನಮಿಸುವ | ಮಾದಿಗರ ನೋಡು. ||೫೫||

ಇಂದುವಿನೊಳುರಿಯುಂಟೆ? ಸಿಂಧುವಿನೊಳರಬುಂಟೆ | ಸಂದವೀರನೊಳು ಭಯವುಂಟೆ? ಭಕ್ತಗೆ | ಸಂದೇಹವುಂಟೆ? ಸರ್ವಜ್ಞ. ||೫೬||

ಕಟ್ಟಲೂ ಬಿಡಲು ಶಿವ ಬಟ್ಟಲವಕದ್ದನೇ | ಕಟ್ಟಲೂಬೇಡ! ಬಿಡಬೇಡ! ಕಣ್ಮನವ | ಕಟ್ಟದರೆ, ಸಾಕು. ||೫೭||

ಕೊಲುವಕೈಯೊಳು ಪೂಜೆ; ಮೆಲುವಬಾಯೊಳು ಮಂತ್ರ | ಸಲೆಪಾಪವೆರದ ಮನದೊಳು ಪೂಜಿಪನು | ಹೊಲೆಯಗೂಕಷ್ಟ? ಸರ್ವಜ್ಞ. ||೫೮||

ಸತಿಯರಾದಡದೇನು? ಸುತರಾಗಿಫಲವೇನು | ಶತಕೋಟಿಧನವ ಘಳಸೇನು? ಭಕ್ತಿಯ | ಸ್ಥಿತಿಯಿಲ್ಲದನಕ. ||೫೯||

## ಜ್ಞಾನಪದ್ಧತಿ.

ಜ್ಞಾನವುಳ್ಳವರೊಡಲು ಭಾನುಮಂಡಲದಂತೆ | ಜ್ಞಾನಿಲ್ಲದವರ ಬರೆಯೊಡಲು ಅಗಸರ | ಬಾನಿಯಂತಕ್ಕು; ಸರ್ವ. ||೬೦||

ಬಲ್ಲನೆಂಬುವ ಮಾತು ಎಲ್ಲವು ಹುಸಿಕಾಣೊ | ಬಲ್ಲರೆ, ಬಲ್ಲೆನೆನಬೇಡ; ಸುಮ್ಮನಿರ | ಬಲ್ಲವನೆಬಲ್ಲ; ಸರ್ವ. ||೬೧||

ಸತ್ತು ಹೋದರೆ, ನಿನಗದೆತ್ತಣದು ಮೋಕ್ಷವೈ | ಸತ್ತು ಹೋಗದಲೆ ಜೀವವಿರಲು, ಮೋಕ್ಷದ| ಗೊತ್ತು ತಿಳಿಯೆಂದ? ಸರ್ವಜ್ಞ. ||೬೨||

ಜೊಳ್ಳು ಮನುಜರು ತಾವು ಸುಳ್ಳು ಸಂಸಾರದೊಳು |

ಮುಳ್ಳಿಡಿದು ಮಾಯೆಯುಂಬವಳ ಬಲೆಯೊಳು | ಹೊಳ್ಳ್ಯಾಡು
ತಿಹರು; ಸರ್ವಜ್ಞ. ||೧೩||

ಎಣ್ಣೆ ಬೆಣ್ಣೆಯು ರುಣವು, ಅನ್ನವಸ್ತ್ರದ ರುಣವು | ಹೊ
ನ್ನೆಂಣಿನ ರುಣವು ತೀರಿದಾಕ್ಷಣದಿ | ಮಣ್ಣು ಪಾಲೆಂದ. ||೧೪||

ಸತ್ಯ ಸದ್ಗುಣತೀರ್ಥ; ಉತ್ತಮರ ನಡೆತೀರ್ಥ | ಸತ್ಯರ
ಸಂಗವದು ತೀರ್ಥ; ಹರಿವನೀ | ರೆತ್ತಣ ತೀರ್ಥ. ||೧೫||

ಆನೆನೀರಾಟದಲಿ ಮೀನಕಂಡಂಜುವದೆ? | ಹೀನ ಮಾನವ
ರ ಬಿರುನುಡಿಗೆ ಸತ್ಯದ | ಜ್ಞಾನಿಯುಂಜುವನೆ? ಸರ್ವ. ||೧೬||

ಆನೆತಾತುಡುಗಾಗೆ, ಜ್ಞಾನಿಮೂರ್ಖನು ಮಾಗೆ | ಭೂನಾ
ಥ ಜಾರನಾದರೆ, ಮಾಣಿಪುದು | ಮಾನವರಿಗಳವೆ. ||೧೭||

ಆನೆಗಂಜಿಕೆಯಾಕೆ? ಶ್ವಾನಗೆ ಸೊಬಗ್ಯಾಕೆ? | ದಾನಿಗೆ ದೀ
ನಗುಣವ್ಯಾಕೆ? ಜ್ಞಾನಿಗೆ | ಹೀನತನವ್ಯಾಕೆ? ಸರ್ವ. ||೧೮||

ಕಾಶಿಕಚ್ಚುಟವ್ಯಾಕೆ? ಆಸುರದ ಜಡಿಯಾಕೆ? | ಕೇಶವನು
ಕಿತ್ತುಕೊಳಲ್ಯಾಕೆ? ತ್ರೈಮತದ | ಆಶೆಬಿಡದನಕ. ||೧೯||

ಅಟ್ಟಡಿಗೆಯು ರುಚಿಯು ಹುಟ್ಟುತಾಬಲ್ಲದೇ? | ಶ್ರೇಷ್ಠರು
ಯೆಂದು ಯೆನಬೇಡ, ಅರುವಿನ | ಬಟ್ಟೆಬೇರೆಂದ. ||೨೦||

ಯುಂಜಲು ಹೊಲೆಯಲ್ಲ; ಸಂಜೆಗತ್ತಲೆಯಲ್ಲ | ಅಂಜಿಕೆ
ಯಿಲ್ಲ; ಸೊಕ್ಕಿಲ್ಲ; ಜ್ಞಾನೆಂಬ | ಅಂಜನವಿರಲು. ||೨೧||

ಜಾತಿಜಾತಿಗವೈರ; ನೀತಿಮೂರ್ಖಗವೈರ | ಪಾತಕವೈರ
ಸುಜನರಿಗರಿದವಗೆ | ಯಾತರವೈರ? ಸರ್ವಜ್ಞ. ||೨೨||

ಬಂಧನವಮಾಡಿದರೂ, ಸಂದಜ್ಞಾನಿಯೆಲೇಸು | ಹೊಂದಿ
ಸಾಸಿರವ ಕೊಡುತಿರಲು ಕರ್ಮಿಯು | ದಂದುಗವೆಬೇಡ, ||೨೩||

ನೀರಬೊಬ್ಬುಳಿನೆಚ್ಚಿ ಸಾರಿಕೆಡದಿರು; ಮರುಳೆ | ಸಾರ
ಗುಣಿಯಾಗು; ಸರ್ವರೊಳು ನಿಜತಿಳಿದು | ಕಾರಣಿಕನಾಗು;
ಸರ್ವಜ್ಞ. ||೨೪||

## ಯೋಗ್ಯಾಯೋಗ್ಯ ಪದ್ಧತಿ.

ಎಲ್ಲರಾಸೆಯುಬಿಟ್ಟ ಡಿಲ್ಲಿಯೇ ಕೈಲಾಸ । ಯೆಲ್ಲವಬಯಿಸಿ
ಭ್ರಮಿಸಿದೊಡೆ, ನರಕತಾ । ನಿಲ್ಲಿಯೇ ನೋಡು. ॥೭೫॥

ಸತ್ಯರು ಹುಸಿದೊಡೆ, ವೃತ್ತಿ ಹರಿದಡೆ ಶರಧಿ । ಉತ್ತಮರು
ತಪ್ಪಿನಡೆದರೆ, ಲೋಕವಿ । ನ್ನೆತ್ತ ಬದುಕುವದು? ಸರ್ವ. ॥೭೬॥

ಅರಿಯದವರೊಡನಾಡಿ ಸರಿರಾಜ್ಯವಾಳುವದು । ಅರಿಕೆ
ಯುಳ್ಳವರೊಡನಾಗಿ ಯಾವಾಗ । ಶೆರೆಯಿಹುದೆ ಲೇಸು; ॥೭೭॥

ತ್ರಿಕರಣರಶುದ್ಧರೊಳು ಪ್ರಕೃತಿವಿರಹಿತರೊಳು । ಮು
ಕುತಿಗೆಳಿಸುವ ಜನರೊಳಗೆ ಯಾವಾಗು । ಸುಖತನವೆ ಲೇಸು;
ಸರ್ವಜ್ಞ. ॥೭೮॥

ಬರೆಕಂಡುಕರೆಯುದನ ಬರೆಕೊಳ್ಳರೆನ್ನದನ । ಸರಸಸಜ್ಜ
ನಿಕೆ ಯಿಲ್ಲದನಗೆಳೆತನ । ಬೆರಸಲೇಬೇಡ, ಸರ್ವ. ॥೭೯॥

ಒಳ್ಳಿದರವೊಡನಿರ್ದ ಕಳ್ಳವೊಳ್ಳಿದನಕ್ಕು । ವೊಳ್ಳಿದಕಳ್ಳ
ನೊಡನಾಡೆ, ಯುವಶುದ್ಧ । ಕಳ್ಳನೇಯುಕ್ಕು; ಸರ್ವ. ॥೮೦॥

ಮಾತು ಬಲ್ಲಂಣತಾ ಸೋತುಹೋಹದುಲೇಸು । ಮಾತಿಗೆ
ಮಾತು ಮಥಿಸಲ್ಕೆ; ವಿಧಿಬಂದು । ಆತುಕೊಂಡಿಹುದು; ॥೮೧॥

ಮಾನಹೀನರಸಂಗ ಯೇನುಕೊಟ್ಟರು ಬೇಡ, । ಮಾನ
ವುಳ್ಳವರಸಂಗತಾ ಸಕ್ಕರೆ । ಜೇನುಸವಿದಂತೆ; ಸರ್ವ ॥೮೨॥

ಬಲ್ಲವರ ಒಡನಾಟ ಬೆಲ್ಲಸನುಮೆದ್ದಂತೆ । ಅಲ್ಲದಹುದೆಂ
ಬ ಜ್ಞಾನಿಯೊಡನಾಟ । ಕಲ್ಲುಹಾದಂತೆ; ಸರ್ವಜ್ಞ. ॥೮೩॥

ಸಜ್ಜನರಸಂಗವು ಹೆಜ್ಜೇನುಸವಿದಂತೆ । ದುರ್ಜನರಕೂಡ
ವೊಡನಾಟ ಬಚ್ಚಲದ । ರೊಚ್ಚೆನಂತಿಹುದು; ಸರ್ವ. ॥೮೪॥

ಸಜ್ಜನನುಸತ್ತರೆ ನಿರ್ಜರರುಮರುಗುವರು । ದುರ್ಜನ
ನು ಸತ್ತುಹೋದರೆತನ್ನ ಮೈ । ಖಜ್ಜಿಹೋದಂತೆ; ॥೮೫॥

ಒಳ್ಳೆನಿಲ್ಲದವೂರು ಕಳ್ಳನೊಡನಾಟವೂ । ಸುಳ್ಳನಮಾತು
ಇವುಮೂರು ಕೆಸರೊಳಗೆ । ಮುಳ್ಳುತುಳದಂತೆ; ॥೮೬॥

ತಪ್ಪುಸಾಧಿಸುವನಲ್ಲಿಪ್ಪವನೆ ಕಡುಹೆಡ್ಡ । ಸರ್ಪನಹೆಡೆ
ಯ ನೆರಳಲ್ಲಿಸೇರಿದಾ । ಕಪ್ಪೆಯಂತಕ್ಕು; ಸರ್ವಜ್ಞ. ॥೮೭॥

ಉದ್ದುರುಟುಮಾತಾಡೆ ಇದ್ದದನುಹೋಗಾಡೆ । ವೃದ್ಧಮ
ರತುದಿಯುಯೇರಿ ಕೈಬಿಟ್ಟುತಾ । ಬಿದ್ದು ಸತ್ತಂತೆ; ॥೮೮॥

## ಸ್ತ್ರೀ ಪದ್ಧತಿ.

ಆಕೆಯನುಕಂಡು ಮನೆಯಾಕೆಯನು ಮರೆದರೆ । ಹಾಕಿ
ದವುಂಕಿ ಹರಿದಂತೆ, ಮನೆಯೊಳಿ । ದ್ದಾಕೆತಾಕೆಡಗು; ॥೮೯॥

ಕೊಂಕುಗುರುಳಿನರಂಭೆ; ಕಂಕಣವು ಕಟಿಸೂತ್ರ । ಪಂ
ಕಜಾಗಂಧಿಯನಬೇಡ; ತಾನೊಲಿದ । ಮಂಕುಮಾಣಿಕವು;
ಸರ್ವಜ್ಞ. ॥೯೦॥

ಸತ್ತವರಬಾಯೊಳಗೆ ಬತ್ತಿನೀರೆರೆದಂತೆ । ಚಿತ್ತವಿಲ್ಲದವಳ
ವೊಡನಾಟ ಶುನಿಹೆಣವ । ಹತ್ತಿತಿಂದಂತೆ; ಸರ್ವಜ್ಞ. ॥೯೧॥

ದಾಸಿಯನುಹೋಗವಗೆ ಲೇಸಾಗದೈಮುಂದೆ । ಹೇಸಿತೊ
ಲಗುವಳು ಜಯಲಕ್ಷ್ಮಿ; ಆಯುಷ್ಯ । ನಾಶವಾಗುವದು;
ಸರ್ವಜ್ಞ. ॥೯೨॥

ಜಾರತ್ವವೆಂಬುದದು ಕ್ಷೀರಸಕ್ಕರೆಯಂತೆ । ಊರಲ್ಲಿ ವೊ
ಬ್ಬರರಿತರೇ ಬೇವಿನ । ಸಾರದಂತಕ್ಕು, ಸರ್ವಜ್ಞ. ॥೯೩॥

ಪುರುಷಕಂಡರೆ, ಕೊಲ್ವ, ಅರಸುದಂಡವಕೊಂಬ । ನರ
ಸುರರುಯೆಲ್ಲ ಮುನಿಸಕ್ಕು; ಅಂತ್ಯಕ್ಕೆ । ನರಕಪರಸತಿಯು,
ಸರ್ವಜ್ಞ. ॥೯೪॥

ನಾರಿಪರವುಪಕಾರಿ ನಾರಿಸ್ವರ್ಗಕೆದಾರಿ । ನಾರಿಸಕಲರಿಗೆ
ಹಿತಕಾರಿ; ಮುನಿದರೇ । ನಾರಿಯೇಮಾರಿ; ಸರ್ವಜ್ಞ. ॥೯೫॥

ಕೊಟ್ಟಾತಬರಡಾದ; ಬಿಟ್ಟಾತಹಯನಾದ । ಕೊಟ್ಟವಳ
ಪಡವೆನೆನುವಾತ ತಾಮೊದಲೆ । ಬಟ್ಟಬಯಲಾದ; ॥೯೬॥

ಹಲ್ಲಮೇಲಿನಕೆಂಪು, ಕಲ್ಲಮೇಲಿನ ಹಂಸೆ | ಮಲ್ಲಿಗೆಯರ
ಳತನಿಗುಂಪು, ಹೊಸಮೋಹ | ನಿಲ್ಲವು; ನೋಡು. ||೯೭||

## ನೀತಿಪದ್ಧತಿ.

ಹೆಣ್ಣನ್ನು ಹೊನ್ನನ್ನು ಹಣ್ಣಾದ ಮರಗಳನು | ಕಣ್ಣಿಲಿ
ಕಂಡು ಮನದಲ್ಲಿ ಬಯಸದಿಹ | ಅಣ್ಣಗಳ್ಯಾರು? ||೯೮||

ಭಂಡು ಹೆಂಡತಿಯಾಗಿ, ತುಂಡೊಬ್ಬ ಸೊಸೆಯಾಗಿ | ಕಂ
ಡಲ್ಲಿ ತಿರಗೋ ಮಗನಾದರೆ, ಮನೆಗೆತಾ | ದಂಡತಪ್ಪದು;
ಸರ್ವಜ್ಞ. ||೯೯||

ಕಣ್ಣುಮನ ನಾಲಿಗೆಯು ತನ್ನದೆಂದೆನಬೇಡ | ಅನ್ಯರು
ಕೊಂದರೆನಬೇಡ! ಇವುಮೂರು| ತನ್ನ ಕೊಲ್ಲುವವು. ||೧೦೦||

ಹಂಗಿನರಮನೆಗಿಂತ ಇಂಗಡದಗುಡಿಲೇಸು | ಭಂಗಪ
ಟ್ಟುಂಬ ಬಿಸಿಯಂನಕಿಂತಲು | ತಂಗಳವಲೇಸು! ||೧೦೧||

ಸಾಲವನು ತರುವಾಗ, ಹಾಲು ಬೋನುಂಡಂತೆ | ಸಾಲಿ
ಗನು ಬಂದು ಕೇಳಿದರೆ, ಕುಂಡಿಗೆ | ಚೇಳು ಕಡಿದಂತೆ;
ಸರ್ವಜ್ಞ. ||೧೦೨||

ಬಲ್ಲಿದನು ನುಡಿದರೆ, ಬೆಲ್ಲವನು ಮೆದ್ದಂತೆ | ಇಲ್ಲದ ಬಡ
ವ ನುಡಿದರೇ, ಬಾಯಿಂದ | ಜೊಲ್ಲು ಬಿದ್ದಂತೆ. ||೧೦೩||

ಕಂಡದ್ದನಾಡೆ, ಭೂಮಂಡಲವು ಮುನಿವುದು | ಕೊಂಡಾ
ಡು ತಿಚೆ ನುಡಿದರೇ, ಜಗವೆಲ್ಲ | ಮುಂಡಾಡುತಿಹುದು;
ಸರ್ವಜ್ಞ. ||೧೦೪||

ಮೇಲರಿಯುದಧಿಕದೊಳು ಕಾಳಗವ ತೊಡಕಿದರೆ |
ಬಾಳುವೆಗೆಟ್ಟು ಬಡವಕ್ಕು ಬೆಸಲಾದ | ಚೇಳನಂತಕ್ಕು;
ಸರ್ವಜ್ಞ. ||೧೦೫||

ಅಂತು ಪದ್ಧತಿಗಳು ೧೧ಕ್ಕೆ—ಪದ್ಯಗಳು ೧೦೫ಕ್ಕಂ ಮಂಗಳಂ.

ಶ್ರೀರಸ್ತು.

# ಸರ್ವಜ್ಞ ಪದ್ಯಗಳು.

ಯೆಲ್ಲಂಭಟ್ಟರ ಸೀತಾರಾಮ ಶಾಸ್ತ್ರಿಗಳವರಿಂದ

ಪರಿಷ್ಕರಿಸಲ್ಪಟ್ಟ,

ಬೆಂಗಳೂರಲ್ಲಿರುವ ಮೈಸೂರು ಬುಕ್ ಡಿಪೋ ಏಜಂಟ

ವೆಲನಾಡು ಬಿ. ಸುಬ್ಬೈಯ್ಯನವರಿಂದ

ಪಬ್ಲಿಷ್ ಮಾಡಲ್ಪಟ್ಟಿತು.

ಮೊದಲನೇ ಛಾಪೆ ಪ್ರತಿ ೧೦೦೦.




ಬೆಂಗಳೂರು

ವೆಸ್ಲಿಯನ್ ಮಿಶ್ಯನ್ ಪ್ರಸ್ಸಿನಲ್ಲಿ ಛಾಪಿಸಲ್ಪಟ್ಟಿತು.

೧೮೭೦.

1872.

